| | | | | | | | |
|---|---|---|---|---|---|---|---|
| 13 | 2019-20 | ಕೋಲಾರ | ಮುಳಬಾಗಿಲು | ಮುಳಬಾಗಿಲು | ಡಾ|| ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ, ಲಕ್ಕೂರು ವಸತಿ ಶಾಲಾ ಸಂಕೀರ್ಣ | ಪ.ಜಾತಿ | 09.09.2021 |
| 14 | 2019-20 | ಕೋಲಾರ | ಶ್ರೀನಿವಾಸಪುರ | ಶ್ರೀನಿವಾಸಪುರ | ಡಾ|| ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ, ತಿಮ್ಮಸಂದ್ರ, ರೋಣುರು ಹೋಬಳಿ ವಸತಿ ಶಾಲಾ ಸಂಕೀರ್ಣ | ಪ.ವರ್ಗ | 19.09.2021 |
| 15 | 2017-18 | ಚಿತ್ರದುರ್ಗ | ಹಿರಿಯೂರು | ಹಿರಿಯೂರು | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಯಲ್ಲದಕೆರೆ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. (ಪ.ಜಾತಿ) | ಪ.ಜಾತಿ | 02.05.2021 |
| 16 | 2017-18 | ಚಿತ್ರದುರ್ಗ | ಚಳ್ಳಕೆರೆ | ಚಳ್ಳಕೆರೆ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ತುರವನೂರು, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. (ಪ.ವರ್ಗ) | ಪ.ವರ್ಗ | 30.04.2021 |
| 17 | 2017-18 | ಚಿತ್ರದುರ್ಗ | ಹೊಳಲ್ಕೆರೆ | ಹೊಳಲ್ಕೆರೆ | ಮೊರಾರ್ಜಿ ದೇಸಾಯಿ ವಸತಿ ಬಿ.ದುರ್ಗ ಬಾಣಗೆರೆ ಬಿ.ದುರ್ಗ | ಪ.ವರ್ಗ | 30.04.2021 |
| 18 | 2017-18 | ಚಿತ್ರದುರ್ಗ | ಹೊಳಲ್ಕೆರೆ | ಹೊಳಲ್ಕೆರೆ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ರಾಮಗಿರಿ (ಬಸಪುರ), ಹೊಳಲ್ಕೇರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. (ಪ.ವರ್ಗ) | ಪ.ವರ್ಗ | 30.05.2021 |
| 19 | 2017-18 | ಶಿವಮೊಗ್ಗ | ಭದ್ರಾವತಿ | ಭದ್ರಾವತಿ | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಹುಣಸೇಕಟ್ಟೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. (ಪ.ಜಾತಿ) | ಪ.ಜಾತಿ | 30.04.2021 |
| 20 | 2017-18 | ಶಿವಮೊಗ್ಗ | ಸೊರಬ | ಸೊರಬ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಚಂದ್ರಗುತ್ತಿ , ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. (ಪ.ಜಾತಿ) | ಪ.ಜಾತಿ | 30.04.2021 |
| 21 | 2017-18 | ಶಿವಮೊಗ್ಗ | ಶಿವಮೊಗ್ಗ | ಶಿವಮೊಗ್ಗ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಆಯನೂರು ಕುಂಸಿ, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. (ಪ.ಜಾತಿ) | ಪ.ಜಾತಿ | 30.04.2021 |
| 22 | 2017-18 | ಶಿವಮೊಗ್ಗ | ಹೊಸನಗರ | ಸಾಗರ | ಶ್ರೀಮತಿ. ಇಂದಿರಾ ಗಾಂಧಿ ವಸತಿ ಶಾಲೆ, ಗೇರುಪುರ ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. (ಪ.ಜಾತಿ) | ಪ.ಜಾತಿ | 09.06.2022 |
| 23 | 2017-18 | ತುಮಕೂರು | ಮಧುಗಿರಿ | ಮಧುಗಿರಿ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ಐಡಿಹಳ್ಳಿ, | ಪ.ವರ್ಗ | 30.06.2021 |
| 24 | 2019-20 | ತುಮಕೂರು | ತುರುವೇಕೆರೆ | ತುರುವೇಕೆರೆ | ಮಣಿಚೆಂಡೂರು,ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ | ಪ.ಜಾತಿ | 31.12.2021 |
| 25 | 2019-20 | ತುಮಕೂರು | ಗುಬ್ಬಿ | ಗುಬ್ಬಿ | ಮಾವಿನಹಳ್ಳಿ, ಡಾ|| ಬಿ.ಆರ್. ಅಂಬೇಡ್ಕರ್ ವಸತಿ ಶಾಲೆ | ಪ.ಜಾತಿ | 04.01.2022 |
| 26 | 2019-20 | ತುಮಕೂರು | ಚಿಕ್ಕನಾಯಕನಹಳ್ಳಿ | ಚಿಕ್ಕನಾಯಕನಹಳ್ಳಿ | ಅಂದನಕೆರೆ, ಡಾ|| ಬಿ.ಆರ್. ಅಂಬೇಡ್ಕರ್ ವಸತಿ ಶಾಲೆ | ಪ.ಜಾತಿ | 30.06.2021 |
| 27 | 2019-20 | ತುಮಕೂರು | ಕೊರಟಗೆರೆ | ಕೊರಟಗೆರೆ | ಕೋಳಾಲ, ಡಾ|| ಬಿ.ಆರ್. ಅಂಬೇಡ್ಕರ್ ವಸತಿ ಶಾಲೆ | ಪ.ಜಾತಿ | 31.08.2021 |
| 28 | 2019-20 | ತುಮಕೂರು | ಕೊರಟಗೆರೆ | ಕೊರಟಗೆರೆ | ಚೆನ್ನರಾಯನದುರ್ಗ,ಕೊಳಾಲ ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ | ಪ.ವರ್ಗ | 01.08.2021 |

| | | | | | | | |
|---|---|---|---|---|---|---|---|
| 29 | 2017-18 | ದಾವಣಗೆರೆ | ದಾವಣಗೆರೆ | ಮಾಯ ಕೊಂಡ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಅಣಜಿ, ದಾವಣಗೆರೆ ತಾಲ್ಲೂಕು & ಜಿಲ್ಲೆ. (ಪ.ಜಾತಿ) | ಪ.ಜಾತಿ | 31.05.2021 |
| 30 | 2017-18 | ದಾವಣಗೆರೆ | ಹರಪ್ಪನಹಳ್ಳಿ | ಹರಪ್ಪನಹಳ್ಳಿ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ನಿಚ್ಚವ್ವನಹಳ್ಳಿ (ಕಡಬಗೆರೆ), ಹರಪ್ಪನಹಳ್ಳಿ ತಾಲ್ಲೂಕು. ದಾವಣಗೆರೆ ಜಿಲ್ಲೆ. (ಪ.ಜಾತಿ) | ಪ.ಜಾತಿ | 30.06.2021 |
| 31 | 2017-18 | ದಾವಣಗೆರೆ | ಹೊನ್ನಾಳಿ | ಹೊನ್ನಾಳಿ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಅರಭಘಟ್ಟ (ಕೆಂಚಿಕೊಪ್ಪ), ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. (ಪ.ಜಾತಿ) | ಪ.ಜಾತಿ | 31.05.2021 |
| 32 | 2017-18 | ದಾವಣಗೆರೆ | ಹೊನ್ನಾಳಿ | ಹೊನ್ನಾಳಿ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ನ್ಯಾಮತ್ತಿ ದೊಡ್ಡತ್ತಿನಹಳ್ಳಿ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. (ಪ.ವರ್ಗ) | ಪ.ವರ್ಗ | 30.06.2021 |
| 33 | 2017-18 | ಮೈಸೂರು | ಹುಣಸೂರು | ಹುಣಸೂರು | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಗಾವಡಗೆರೆ (ಹರಿವೆ), ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ. | ಪ.ವರ್ಗ | 31.07.2021 |
| 34 | 2019-20 | ಮೈಸೂರು | ಕೆ.ಆರ್ ನಗರ | ಕೆ.ಆರ್ ನಗರ | ಡಾ॥ ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ, ಮಾರಗೊಂಡನಹಳ್ಳಿ ಶಾಲಾ ಸಂಕೀರ್ಣ | ಪ.ಜಾತಿ | 20.5.2022 |
| 35 | 2019-20 | ಮೈಸೂರು | ಕೆ.ಆರ್ ನಗರ | .ಕೆ.ಆರ್ ನಗರ | ಡಾ॥ ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ, ಸಕ್ಕರೆ, ಚುಂಚನಕಟ್ಟೆ ಹೋಬಳಿ ಶಾಲಾ ಸಂಕೀರ್ಣ | ಪ.ಜಾತಿ | 15.01.2022 |
| 36 | 2017-18 | ಮಂಡ್ಯ | ಶ್ರೀರಂಗ ಪಟ್ಟಣ | ಶ್ರೀರಂಗ ಪಟ್ಟಣ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಅರಕೆರೆ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ. (ಪ.ಜಾತಿ) | ಪ.ಜಾತಿ | 31.10.2021 |
| 37 | 2017-18 | ಮಂಡ್ಯ | ಮಂಡ್ಯ | ಮಂಡ್ಯ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ,, ಬಸರಾಳು, ಮಂಡ್ಯ ತಾಲ್ಲೂಕು & ಜಿಲ್ಲೆ. (ಪ.ಜಾತಿ) | ಪ.ಜಾತಿ | 31.05.2021 |
| 38 | 2017-18 | ಮಂಡ್ಯ | ಮಂಡ್ಯ | ಮಂಡ್ಯ | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಮಂಡ್ಯ (ತುಂಬಕೆರೆ), ಮಂಡ್ಯ ತಾಲ್ಲೂಕು & ಜಿಲ್ಲೆ. (ಪ.ಜಾತಿ) | ಪ.ಜಾತಿ | 31.10.2021 |
| 39 | 2017-18 | ಮಂಡ್ಯ | ಮಳವಳ್ಳಿ | ಮಳವಳ್ಳಿ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಬಿ.ಜಿ.ಪುರ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ. | ಪ.ಜಾತಿ | 30.04.2021 |
| 40 | 2017-18 | ಮಂಡ್ಯ | ಮಳವಳ್ಳಿ | ಮಳವಳ್ಳಿ | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಯತ್ತಾಂಬಾಡಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ. (ಪ.ಜಾತಿ). | ಪ.ಜಾತಿ | 01.09.2021 |
| 41 | 2019-20 | ಮಂಡ್ಯ | ಕೆ.ಆರ್. ಪೇಟೆ | ಕೆ.ಆರ್. ಪೇಟೆ | ಜೈನಹಳ್ಳಿ, ಡಾ॥ ಬಿ.ಆರ್. ಅಂಬೇಡ್ಕರ್(ಸಹ ಶಿಕ್ಷಣ) ವಸತಿ ಶಾಲೆ | ಪ.ಜಾತಿ | 30.11.2021 |
| 42 | 2019-20 | ಮಂಡ್ಯ | ಶ್ರೀರಂಗ ಪಟ್ಟಣ | ಶ್ರೀರಂಗ ಪಟ್ಟಣ | ಬೆಳಗೊಳ, ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ | ಪ.ಜಾತಿ | 03.11.2021 |

| | | | | | | | |
|---|---|---|---|---|---|---|---|
| 43 | 2019-20 | ಚಿಕ್ಕಮಗಳೂರು | ಮೂಡಿಗೆರೆ | ಮೂಡಿಗೆರೆ | ಡಾ।। ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ, ಮಾವಿನಕೆರೆ, ಕಳಶಾ ಹೋಬಳಿ ಶಾಲಾ ಸಂಕೀರ್ಣ | ಪ.ಜಾತಿ | 09.08.2021 |
| 44 | 2017-18 | ಹಾಸನ | ಅರಸೀಕೆರೆ | ಅರಸೀಕೆರೆ | ಡಾ।। ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ(ಸಹ ಶಿಕ್ಷಣ) ಗಂಡಸಿ (ಬಾಗೇಶ್ವಪುರ), ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ. (ಪ.ಜಾತಿ) | ಪ.ಜಾತಿ | 30.06.2021 |
| 45 | 2019-20 | ಹಾಸನ | ಹೊಳೇನರ ಸಿಪುರ | ಹೊಳೇನರ ಸಿಪುರ | ಡಾ।। ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ, ಗುಡ್ಡೇನಹಳ್ಳಿ ,ಹಳ್ಳಿ ಮೈಸೂರು ಹೋಬಳಿ ಶಾಲಾ ಸಂಕೀರ್ಣ | ಪ.ಜಾತಿ | 04.07.2021 |
| 46 | 2019-20 | ಹಾಸನ | ಬೇಲೂರು | ಬೇಲೂರು | ಡಾ: ಬಿ.ಆರ್.ಅಂಬೇಡ್ಕರ್ ವಸತಿ ಶಾಲೆ, ಬೀಕೊಡು | ಪ.ಜಾತಿ | 13.01.2022 |
| 47 | 2019-20 | ಹಾಸನ | ಅರಕಲ ಗೂಡು | ಅರಕಲ ಗೂಡು | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ ಕೇರಳಾಪುರ | ಪ.ಜಾತಿ | 13.01.2022 |
| 48 | 2019-20 | ಹಾಸನ | ಆಲೂರು | ಆಲೂರು | ಕೆಂಚಮ್ಮನ ಹೊಸಕೋಟೆ, ಡಾ।। ಬಿ.ಆರ್. ಅಂಬೇಡ್ಕರ್ ಬಾಲಕಿಯರ ವಸತಿ ಶಾಲೆ | ಪ.ಜಾತಿ | 30.06.2022 |
| 49 | 2019-20 | ಹಾಸನ | ಸಕಲೇಶ ಪುರ | ಸಕಲೇಶ ಪುರ | ಎಳಸೂರು, ಡಾ।। ಬಿ.ಆರ್. ಅಂಬೇಡ್ಕರ್ ವಸತಿ ಶಾಲೆ | ಪ.ಜಾತಿ | 13.01.2022 |
| 50 | 2019-20 | ಹಾಸನ | ಸಕಲೇಶ ಪುರ | ಸಕಲೇಶ ಪುರ | ಆನಬಾಳು, ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ | ಪ.ಜಾತಿ | 30.06.2022 |
| 51 | 2019-20 | ಹಾಸನ | ಅರಕಲ ಗೂಡು | ಅರಕಲ ಗೂಡು | ಮೊರಾರ್ಜಿ ದೇಸಾಯಿ ವಸತಿ ಶಾಲೆ ಮಲ್ಲಿಪಟ್ಟಣ | ಪ.ಜಾತಿ | 15.06.2022 |
| 52 | 2017-18 | ಚಾಮರಾಜನಗರ | ಕೊಳ್ಳೇಗಾಲ | ಕೊಳ್ಳೇಗಾಲ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ರಾಮಪುರ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ. (ಪ.ಜಾತಿ) | ಪ.ಜಾತಿ | 31.07.2021 |
| 53 | 2017-18 | ಚಾಮರಾಜನಗರ | ಕೊಳ್ಳೇಗಾಲ | ಕೊಳ್ಳೇಗಾಲ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ಪಾಳ್ಯ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ. (ಪ.ಜಾತಿ) | ಪ.ಜಾತಿ | 30.06.2021 |
| 54 | 2017-18 | ಚಾಮರಾಜನಗರ | ಚಾಮರಾಜ ನಗರ | ಚಾಮರಾಜ ನಗರ | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಜ್ಯೋತಿಗೌಡನಪುರ ಚಾಮರಾಜನಗರ ಜಿಲ್ಲೆ. (ಪ.ಜಾತಿ) | ಪ.ಜಾತಿ | 31.08.2021 |
| 55 | 2017-18 | ಬೆಳಗಾವಿ | ಖಾನಾಪುರ | ಖಾನಾಪುರ | ಅಮ್ಮಟೆ, ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ. | ಪ.ಜಾತಿ | 31.07.2021 |
| 56 | 2017-18 | ಬೆಳಗಾವಿ | ರಾಯಭಾಗ | ರಾಯಭಾಗ | ಮಂಟೂರು, ಮೊರಾರ್ಜಿ ದೇಸಾಯಿ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ. | ಪ.ಜಾತಿ | 31.07.2021 |
| 57 | 2017-18 | ಬೆಳಗಾವಿ | ರಾಯಭಾಗ | ರಾಯಭಾಗ | ಕಪ್ಪಲಗುದ್ದಿ, ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ. | ಪ.ಜಾತಿ | 31.07.2021 |
| 58 | 2019-20 | ವಿಜಯಪುರ | ಇಂಡಿ | ಇಂಡಿ | ಮೊರಾರ್ಜಿ ದೇಸಾಯಿ ವಸತಿ ಶಾಲೆ ಅಥರ್ಗ | ಪ.ಜಾತಿ | 12.12.2021 |

| | | | | | | | |
|---|---|---|---|---|---|---|---|
| 59 | 2017-18 | ಉತ್ತರ ಕನ್ನಡ | ಅಂಕೋಲ | ಅಂಕೋಲ | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಬಳಸೆ | ಪ.ಜಾತಿ | 30.06.2021 |
| 60 | 2017-18 | ಉತ್ತರ ಕನ್ನಡ | ಭಟ್ಕಳ | ಭಟ್ಕಳ | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ,ಭಟ್ಕಳ | ಪ.ವರ್ಗ | 31.05.2021 |
| 61 | 2018-19 | ಉತ್ತರ ಕನ್ನಡ | ಹೊನ್ನಾವರ | ಹೊನ್ನಾವರ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ. ಮಂಕಿ | ಪ.ಜಾತಿ | 31.05.2021 |
| 62 | 2018-19 | ಉತ್ತರ ಕನ್ನಡ | ಹಳಿಯಾಳ | ಹಳಿಯಾಳ | ಆಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆ.ಹಳಿಯಾಳ(ಮದನಹಳ್ಳಿ) | ಪ.ಜಾತಿ | 31.05.2021 |
| 63 | 2017-18 | ಗದಗ | ಗದಗ | ನರಗುಂದ | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ ಲಕ್ಕುಂಡಿ | ಪ.ಜಾತಿ | 30.06.2021 |
| 64 | 2017-18 | ಕಲಬುರಗಿ | ಜೇವರ್ಗಿ | ಜೇವರ್ಗಿ | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಜೇವರ್ಗಿ (ನೆಲೋಗಿ) | ಪ.ಜಾತಿ | 31.03.2021 |
| 65 | 2017-18 | ಕಲಬುರಗಿ | ಚಿತ್ತಾಪುರ | ಚಿತ್ತಾಪುರ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ನಾಲ್ವರ | ಪ.ಜಾತಿ | 31.03.2021 |
| 66 | 2017-18 | ಕಲಬುರಗಿ | ಚಿತ್ತಾಪುರ | ಚಿತ್ತಾಪುರ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಕರದಾಳ ವಾಡಿ | ಪ.ಜಾತಿ | 31.03.2021 |
| 67 | 2017-18 | ಕಲಬುರಗಿ | ಚಿಂಚೋಳಿ | ಚಿಂಚೋಳಿ | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಐನಾಪುರ | ಪ.ಜಾತಿ | 30.06.2021 |
| 68 | 2017-18 | ಕಲಬುರಗಿ | ಆಳಂದ | ಆಳಂದ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ, ಖಜುರಿ | ಪ.ಜಾತಿ | 30.06.2021 |
| 69 | 2017-18 | ಕಲಬುರಗಿ | ಜೇವರ್ಗಿ | ಜೇವರ್ಗಿ | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ,, ಕೊಲ್ಲೂರು | ಪ.ಜಾತಿ | 30.06.2021 |
| 70 | 2017-18 | ಕಲಬುರಗಿ | ಅಫ್‌ಜಲ್ ಪುರ | ಅಫ್‌ಜಲ್ ಪುರ | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಅಫ್‌ಜಲ್‌ಪುರ (ಕರಜಗಿ) | ಪ.ಜಾತಿ | 30.06.2021 |
| 71 | 2017-18 | ಕಲಬುರಗಿ | ಚಿತ್ತಾಪುರ | ಚಿತ್ತಾಪುರ | ವಸತಿ ಸಹಿತ ಪದವಿ ಪೂರ್ವ ಕಾಲೇಜು, ಗುಂಡಗುರ್ತಿ | ಪ.ಜಾತಿ | 30.06.2021 |
| 72 | 2017-18 | ಕಲಬುರಗಿ | ಜೇವರ್ಗಿ | ಜೇವರ್ಗಿ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ಯಡ್ರಾಮಿ | ಪ.ವರ್ಗ | 31.05.2021 |
| 73 | 2019-20 | ಕಲಬುರಗಿ | ಚಿತ್ತಾಪುರ | ಚಿತ್ತಾಪುರ | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ ವಾಡಿ ಟೌನ್ | ಪ.ಜಾತಿ | 09.07.2021 |
| 74 | 2019-20 | ಕಲಬುರಗಿ | ಚಿತ್ತಾಪುರ | ಚಿತ್ತಾಪುರ | ಮೊರಾರ್ಜಿ ದೇಸಾಯಿ ವಸತಿ ಶಾಲೆ ವಾಡಿ ಟೌನ್ | ಪ.ಜಾತಿ | 09.07.2021 |
| 75 | 2019-20 | ಕಲಬುರಗಿ | ಚಿತ್ತಾಪುರ | ಚಿತ್ತಾಪುರ | ಕಲ್ಬುರ್ಗಿ ಜಿಲ್ಲೆ ಚಿತ್ತಾಪುರ ತಾಲ್ಲೂಕ ಚಿತ್ತಾಪುರ ಟೌನನಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ. | ಪ.ಜಾತಿ | 09.07.2021 |
| 76 | 2019-20 | ಕಲಬುರಗಿ | ಚಿತ್ತಾಪುರ | ಚಿತ್ತಾಪುರ | ಕಲ್ಬುರ್ಗಿ ಜಿಲ್ಲೆ ಚಿತ್ತಾಪುರ ತಾಲ್ಲೂಕ ವಾಡಿ ಟೌನನಲ್ಲಿ ಡಾ|| ಬಿ.ಆರ್. ಅಂಬೇಡ್ಕರ್ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ. | ಪ.ಜಾತಿ | 09.07.2021 |
| 77 | 2019-20 | ಕಲಬುರಗಿ | ಆಳಂದ | ಆಳಂದ | ಡಾ: ಬಿ.ಆರ್.ಅಂಬೇಡ್ಕರ್ ಬಾಲಕಿಯರ ವಸತಿ ಶಾಲೆ, ಕಸಬಾ ಹೋಬಳಿ | ಪ.ವರ್ಗ | 04.06.2022 |
| 78 | 2019-20 | ಯಾದಗಿರಿ | ಯಾದಗಿರಿ | ಗುರ್ ಮಿಟಕಲ್ | ಹಟ್ಟಿಕುಣಿ ಗ್ರಾಮದಲ್ಲಿ ಡಾ|| ಬಿ.ಆರ್ ಅಂಬೇಡ್ಕರ್ ವಸತಿ ಶಾಲಾ ಸಂಕೀರ್ಣ ಕಾಮಗಾರಿ | ಪ.ಜಾತಿ | 09.03.2022 |

| | | | | | | | |
|---|---|---|---|---|---|---|---|
| 79 | 2019-20 | ಯಾದಗಿರಿ | ಸುರಪುರ | ಸುರಪುರ | ಡಾ|| ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ(ಸಹ ಶಿಕ್ಷಣ) ಮದನೂರು | ಪ.ಜಾತಿ | 01.06.2022 |
| 80 | 2019-20 | ಯಾದಗಿರಿ | ಶಹಪೂರ | ಯಾದಗಿರಿ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ ಕಡಂಗೇರಿ | ಪ.ಜಾತಿ | 05.03.2022 |
| 81 | 2019-20 | ಯಾದಗಿರಿ | ಸುರಪುರ | ಸುರಪುರ | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಸುರಪುರ | ಪ.ವಗ ೯ | 19.06.2022 |
| 82 | 2017-18 | ಬೀದರ್ | ಭಾಲ್ಕಿ | ಭಾಲ್ಕಿ | ಕಿತ್ತೂರು ರಾಣಿಚೆನ್ನಮ್ಮ ವಸತಿ ಶಾಲೆ ಕಟ್ಟಡ ನಿರ್ಮಾಣ ಕಾಮಗಾರಿ ನಿಟ್ಟೂರು | ಪ.ಜಾತಿ | 30.04.2021 |
| 83 | 2019-20 | ಬೀದರ್ | ಬೀದರ್ | ಬೀದರ್ (ದ) | ಅಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆ, ಘೋಡಂಪಲ್ಲಿ, ರಾಂಪುರ ಕಾಲೋನಿ | ಪ.ಜಾತಿ | 28.05.2021 |
| 84 | 2019-20 | ಬೀದರ್ | ಹುಮನಾ ಬಾದ್ | ಹುಮನಾ ಬಾದ್ | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ, ಘಾಟಬೋರಳ (ಕೆ. ಹಳ್ಳಿಖೇಡ) | ಪ.ಜಾತಿ | 28.05.2021 |
| 85 | 2019-20 | ಬಳ್ಳಾರಿ | ಸಂಡೂರು | ಸಂಡೂರು | ಸುಶೀಲನಗರ, ಮೊರಾರ್ಜಿ ದೇಸಾಯಿ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ | ಪ.ಜಾತಿ | 25.08.2021 |
| 86 | 2019-20 | ಕೊಪ್ಪಳ | ಕುಷ್ಟಗಿ | ಕುಷ್ಟಗಿ | ತಾವರೆಗೆರೆ, ಮೊರಾರ್ಜಿ ದೇಸಾಯಿ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ | ಪ.ಜಾತಿ | 14.09.2021 |
| 87 | 2017-18 | ರಾಯಚೂರು | ದೇವದುರ್ಗ | ದೇವದುರ್ಗ | ಗಬ್ಬೂರು, ಮೊರಾರ್ಜಿ ದೇಸಾಯಿ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ | ಪ.ಜಾತಿ | 30.04.2021 |
| 88 | 2017-18 | ರಾಯಚೂರು | ದೇವದುರ್ಗ | ದೇವದುರ್ಗ | ಗಲಗ, (ಜಾಲಹಳ್ಳಿ) ಡಾ||.ಬಿ.ಆರ್ ಅಂಬೇಡ್ಕರ್ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ | ಪ.ವರ್ಗ | 31.05.2021 |
| 89 | 2019-20 | ರಾಯಚೂರು | ರಾಯಚೂರು | ರಾಯಚೂರ ು ಗ್ರಾಮಾಂತರ | ಯರಗೇರಾ (ಕಲ್ಮಲಾ) ಮೊರಾಜೀ ದೇಸಾಯಿ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ | ಪ.ಜಾತಿ | 30.06.2021 |
| 90 | 2019-20 | ರಾಯಚೂರು | ಸಿಂಧನೂರು | ಮಸ್ಕಿ | ತುರುವಿನಹಾಳ, ಮೊರಾರ್ಜಿ ದೇಸಾಯಿ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ | ಪ.ವರ್ಗ | 13.11.2021 |
| 91 | 2019-20 | ರಾಯಚೂರು | ಮಾನ್ವಿ | ಮಸ್ಕಿ | ಹಾಲಾಪುರ, ಡಾ||ಬಿ.ಆರ್. ಅಂಬೇಡ್ಕರ್ ವಸತಿ ಶಾಲಾ ಸಂಕೀರ್ಣ ನಿರ್ಮಾಣ ಕಾಮಗಾರಿ | ಪ.ವರ್ಗ | 30.11.2021 |
| 92 | - | ರಾಯಚೂರು | ರಾಯಚೂ ರು | - | ಸರ್ಕಾರಿ ವಸತಿ ಶಾಲೆ, ಉಡುಮಗಲ್ | ಪ.ಜಾತಿ | ಟೆಂಡರ್ ಹಂತದಲ್ಲಿದೆ. |

## ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 2004 ಕ್ಕೆ ಅನುಬಂಧ-4

| ಕ್ರ ಸಂ | ವರ್ಷ | ಜಿಲ್ಲೆ | ತಾಲ್ಲೂಕು | ವಿಧಾನ ಸಭಾ ಕ್ಷೇತ್ರ | ಯೋಜನೆಯ ಹೆಸರು | ವರ್ಗ | ಮೂಲ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಮುಕ್ತಾಯ ಗೊಳಬಹುದಾದ ಸಾಂಭವ್ಯ ದಿನಾಂಕ | ಭೌತಿಕ ಪ್ರಗತಿ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | 2017-18 | ಕಲಬುರಗಿ | ಜೇವರ್ಗಿ | ಜೇವರ್ಗಿ | ಮೊರಾರ್ಜಿ ದೇಸಾಯಿ ವಸತಿ ಶಾಲೆ, ಜೇವರ್ಗಿ (ನೆಲೋಗಿ) | ಪ. ಜಾತಿ | 1680 | 31.03.2021 | ಎಲ್ಲಾ ಕಟ್ಟಡ ಕಾಮಗಾರಿಗಳು ಪೂರ್ಣಗೊಂಡಿದ್ದು, ವಿದ್ಯುತ್ ಸಂಪರ್ಕ ನೀಡುವುದು ಬಾಕಿ ಇರುತ್ತದೆ. |
| 2 | 2017-18 | ಕಲಬುರಗಿ | ಜೇವರ್ಗಿ | ಜೇವರ್ಗಿ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ಕೊಲ್ಲೂರು | ಪ. ಜಾತಿ | 1665 | 30.06.2021 | ಎಲ್ಲಾ ಕಟ್ಟಡಗಳಲ್ಲಿ ಗಿಲಾವು ಮತ್ತು ನೆಲಹಾಸು ಕಾಮಗಾರಿಗಳು ಪ್ರಗತಿಯಲ್ಲಿವೆ. |
| 3 | 2017-18 | ಕಲಬುರಗಿ | ಜೇವರ್ಗಿ | ಜೇವರ್ಗಿ | ಶ್ರೀಮತಿ ಇಂದಿರಾ ಗಾಂಧಿ ವಸತಿ ಶಾಲೆ, ಯಡ್ರಾಮಿ | ಪ. ವರ್ಗ | 1665 | 31.05.2021 | ಕಟ್ಟಡ ಕಾಮಗಾರಿಗಳು ಬಹುತೇಕ ಪೂರ್ಣಗೊಂಡಿದ್ದು, ಅಂತಿಮ ಹಂತದ ಕಾಮಗಾರಿಗಳು ಪ್ರಗತಿಯಲ್ಲಿದೆ. |

# ಕರ್ನಾಟಕ ವಿಧಾನಸಭೆ
## 15ನೇ ವಿಧಾನಸಭೆ
## 9ನೇ ಅಧಿವೇಶನ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 2126 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಪರಮೇಶ್ವರ್ ಜಿ. ಡಾ॥ (ಕೊರಟಗೆರೆ) |
| ಉತ್ತರಿಸುವ ದಿನಾಂಕ | : | 15-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಗಳು, (ಲೋಕೋಪಯೋಗಿ ಸಚಿವರು) |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ (ಕೆ.ಆರ್.ಡಿ.ಸಿ.ಎಲ್) ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ (ಕೆಶಿಪ್) ಸಂಸ್ಥೆಗಳಿಂದ ಅಭಿವೃದ್ಧಿ ಪಡಿಸಿರುವ ಮತ್ತು ಅಭಿವೃದ್ಧಿ ಪಡಿಸಲಾಗುತ್ತಿರುವ ರಾಜ್ಯ ಹೆದ್ದಾರಿಗಳ ಮೇಲೆ ಬಳಕೆದಾರರ ಶುಲ್ಕ ಸಂಗ್ರಹಿಸಲು ಟೋಲ್ ಪ್ಲಾಜಾಗಳನ್ನು ನಿರ್ಮಿಸಲು ಸರ್ಕಾರಕ್ಕೆ ಇರುವ ನಿಯಮಗಳೇನು; | ಸರ್ಕಾರದ ಅಧಿಸೂಚನೆ ಸಂಖ್ಯೆ: :ಪಿಡಬ್ಲ್ಯೂಡಿ/06/ಇಎಪಿ/2012 (ಪಿ3) ದಿನಾಂಕ: 07-03-2015 ರಲ್ಲಿ ವಿಧಿಸಿರುವ ನಿಯಮಾನುಸಾರ ಟೋಲ್ ಪ್ಲಾಜಾಗಳನ್ನು ಗ್ರಾಮ ಅಥವಾ ನಗರದಿಂದ 10.00 ಕಿ.ಮೀ ಗಿಂತ ಹೆಚ್ಚು ಅಂತರದಲ್ಲಿ ನಿರ್ಮಿಸಬೇಕಾಗಿರುತ್ತದೆ. ಕೆಲವು ವಿಶೇಷ ಪ್ರಕರಣಗಳಲ್ಲಿ ಸಮಂಜಸ ಕಾರಣಗಳನ್ನು ದಾಖಲಿಸಿ 10.00 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ಆದರೆ 5.00 ಕಿ.ಮೀ ಗಿಂತ ಹೆಚ್ಚಿನ ಅಂತರದಲ್ಲಿ ನಿರ್ಮಿಸಬಹುದಾಗಿರುತ್ತದೆ.<br>ಆದಾಗ್ಯೂ ಹೊಸದಾಗಿ ನಿರ್ಮಿಸಿದ ರಸ್ತೆ ಅಥವಾ ಸೇತುವೆಗಳು ಗ್ರಾಮ / ಪಟ್ಟಣದಿಂದ 5.00 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ಇದ್ದು, ಅಂತಹ ಸಂದರ್ಭದಲ್ಲಿ ಟೋಲ್ ಪ್ಲಾಜಾವನ್ನು ಗ್ರಾಮ / ಪಟ್ಟಣದಿಂದ 5.00 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ನಿರ್ಮಿಸಲು ಸದರಿ ಅಧಿಸೂಚನೆಯಲ್ಲಿ ಅವಕಾಶವಿರುತ್ತದೆ.<br>ಒಂದು ಹೆದ್ದಾರಿಯಲ್ಲಿ ಎರಡು ಟೋಲ್ ಪ್ಲಾಜಾಗಳನ್ನು ನಿರ್ಮಿಸಿದ ಪಕ್ಷದಲ್ಲಿ ಅವುಗಳ ನಡುವಿನ ಅಂತರವು ಕನಿಷ್ಟ 60.00 ಕಿ.ಮೀ ಇರಬೇಕಾಗಿರುತ್ತದೆ.<br>ಟೋಲ್ ಸಂಗ್ರಹಣಾ ಪ್ರಾಧಿಕಾರಕ್ಕೆ ಟೋಲ್ ಪ್ಲಾಜಾವನ್ನು 60.00 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ನಿರ್ಮಿಸುವ ಅವಶ್ಯಕತೆ ಕಂಡುಬಂದಲ್ಲಿ ಅಂತಹ ಸಂದರ್ಭದಲ್ಲಿ 60.00 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ನಿರ್ಮಿಸಬಹುದಾಗಿರುತ್ತದೆ. |
| ಆ) | ತುಮಕೂರು ಜಿಲ್ಲೆ ಕೊರಟಗೆರೆ ವಿದಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹಾದುಹೋಗಿರುವ ರಾಜ್ಯ ಹೆದ್ದಾರಿ-03 ಮತ್ತು 33 ರಲ್ಲಿ ಬಳಕೆದಾರರಿಂದ ಶುಲ್ಕ ವಸೂಲಿ ಮಾಡಲು ಎಷ್ಟು ಟೋಲ್ ಪ್ಲಾಜಾಗಳನ್ನು ಅಳವಡಿಸಲಾಗಿದೆ? | ಅ) ತುಮಕೂರು ಜಿಲ್ಲೆ ಕೊರಟಗೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹಾದುಹೋಗಿರುವ ರಾಜ್ಯ ಹೆದ್ದಾರಿ-03 ರ ಮಾಗಡಿ-ದಾಬಸಪೇಟೆ-ಪಾವಗಡ-ಆಂಧ್ರಪ್ರದೇಶ ಗಡಿ ರಸ್ತೆಯಲ್ಲಿ 3 ಟೋಲ್ ಪ್ಲಾಜಾಗಳನ್ನು ಗುಡೇಮಾರನಹಳ್ಳಿ (ಮಾಗಡಿ ತಾಲ್ಲೂಕು) ತುಂಬಾಡಿ (ಕೊರಟಗೆರೆ ತಾಲ್ಲೂಕು) ಮತ್ತು ಬುಡ್ಡಾರೆಡ್ಡಿಹಳ್ಳಿ (ಪಾವಗಾಡ ತಾಲ್ಲೂಕು) ಗ್ರಾಮಗಳಲ್ಲಿ ನಿರ್ಮಿಸಿಸಿ ಶುಲ್ಕ ವಸೂಲಾತಿ ಮಾಡಲಾಗುತ್ತಿದೆ.<br>ಆ) ತುಮಕೂರು ಜಿಲ್ಲೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹಾದುಹೋಗಿರುವ ರಾಜ್ಯ ಹೆದ್ದಾರಿ-33 ರ ಮಳವಳ್ಳಿ-ಮದ್ದೂರು-ಕೊರಟಗೆರೆ ರಸ್ತೆಯಲ್ಲಿ 2 ಟೋಲ್ ಪ್ಲಾಜಾಗಳನ್ನು ದೊಡ್ಡಮಾವತ್ತೂರು (ಕುಣಿಗಲ್ ತಾಲ್ಲೂಕು) ಮತ್ತು ಓಬಳಾಪುರ (ತುಮಕೂರು ತಾಲ್ಲೂಕು) ಗ್ರಾಮಗಳಲ್ಲಿ ನಿರ್ಮಿಸಿ ಶುಲ್ಕ ವಸೂಲಾತಿ ಮಾಡಲಾಗುತ್ತಿದೆ. |

| | | |
|---|---|---|
| ಇ) | ನಿಯಮಾನುಸಾರ ಒಂದು ಟೋಲ್‌ನಿಂದ ಇನ್ನೊಂದು ಟೋಲ್ ಪ್ಲಾಜಾಗಳ ಮಧ್ಯೆ ಇರಬೇಕಾದ ಕನಿಷ್ಠ ದೂರ (ಕಿ.ಮೀ.ಗಳಲ್ಲಿ) ಎಷ್ಟು; | ಸರ್ಕಾರದ ಅಧಿಸೂಚನೆ ಸಂಖ್ಯೆ:ಪಿಡಬ್ಲ್ಯೂಡಿ/06/ಇಎಪಿ/2012 (ಪಿ3) ದಿನಾಂಕ:07-03-2015 ರ ನಿಯಮಗಳ ಅನ್ವಯ ಒಂದು ಹೆದ್ದಾರಿಯಲ್ಲಿ ಎರಡು ಟೋಲ್ ಪ್ಲಾಜಾಗಳನ್ನು ನಿರ್ಮಿಸಿದ ಪಕ್ಷದಲ್ಲಿ ಅವುಗಳ ನಡುವಿನ ಅಂತರವು ಕನಿಷ್ಠ 60.00 ಕಿ.ಮೀ ಇರಬೇಕಾಗಿರುತ್ತದೆ.<br>ಟೋಲ್ ಸಂಗ್ರಹಣಾ ಪ್ರಾಧಿಕಾರಕ್ಕೆ ಟೋಲ್ ಪ್ಲಾಜಾವನ್ನು 60.00 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ನಿರ್ಮಿಸುವ ಅವಶ್ಯಕತೆ ಕಂಡುಬಂದಲ್ಲಿ ಅಂತಹ ಸಂದರ್ಭದಲ್ಲಿ 60.00 ಕಿ.ಮೀ ಗಿಂತ ಕಡಿಮೆ ಅಂತರದಲ್ಲಿ ನಿರ್ಮಿಸಬಹುದಾಗಿರುತ್ತದೆ. |
| ಈ) | ಕೊರಟಗೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಅತೀ ಕನಿಷ್ಠ ಅಂತರದಲ್ಲಿ 02 ಟೋಲ್‌ಗಳನ್ನು ಅಳವಡಿಸಿ ಶುಲ್ಕ ವಸೂಲಿ ಮಾಡುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊರಟಗೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 02 ಟೋಲ್‌ಪ್ಲಾಜಾಗಳು ಇದ್ದು, ಇದರಲ್ಲಿ ಓಬಳಾಪುರ ಟೋಲ್ ಪ್ಲಾಜಾ ರಾಜ್ಯ ಹೆದ್ದಾರಿ-33 ರಲ್ಲಿ ನಿರ್ಮಿಸಿದ್ದು, ತುಂಬಾಡಿ ಟೋಲ್ ಪ್ಲಾಜಾ ರಾಜ್ಯ ಹೆದ್ದಾರಿ-3 ರಲ್ಲಿ ನಿರ್ಮಿತವಾಗಿರುತ್ತದೆ. ಇವುಗಳ ಅಂತರ 21.00 ಕಿ.ಮೀ ಇದ್ದರೂ, ಸದರಿ 2 ಟೋಲ್‌ಪ್ಲಾಜಾಗಳು ಬೇರೆ ಬೇರೆ ರಾಜ್ಯ ಹೆದ್ದಾರಿಗಳಿಗೆ ಸೇರಿದ್ದು, ಪ್ರತ್ಯೇಕ ಟೋಲ್ ಗುತ್ತಿಗೆಗಳಿಗೆ ಒಳಪಟ್ಟಿರುತ್ತದೆ. ಈ ಎರಡೂ ಟೋಲ್ ಪ್ಲಾಜಾಗಳ ವ್ಯಾಪ್ತಿಗೆ ಒಳಪಡುವ ರಸ್ತೆಗಳು ಪ್ರತ್ಯೇಕವಿದ್ದು, ಓವರ್‌ಲ್ಯಾಪಿಂಗ್ **(Overlapping)** ಆಗಿರುವುದಿಲ್ಲ. ಸದರಿ ಪ್ಲಾಜಾಗಳಲ್ಲಿ ಶುಲ್ಕ ವಸೂಲಾತಿಯು ಆಯಾ ಟೋಲ್ ಪ್ಲಾಜಾ ಅಡಿಯಲ್ಲಿ ಬರುವ ರಸ್ತೆ ಭಾಗಗಳಿಗೆ ಮಾತ್ರ ಅನುಗುಣವಾಗಿ ಇರುತ್ತದೆ. |
| ಉ) | ಬಂದಿದ್ದಲ್ಲಿ, ಅವುಗಳನ್ನು ತೆರವುಗೊಳಿಸಲು ಅಥವಾ ಸ್ಥಳಾಂತರಿಸಲು ಸರ್ಕಾರ ಕ್ರಮ ವಹಿಸುವುದೆ? (ವಿವರ ನೀಡುವುದು) | ಸದರಿ 2 ಟೋಲ್ ಪ್ಲಾಜಾಗಳು ಬೇರೆ ಬೇರೆ ರಾಜ್ಯ ಹೆದ್ದಾರಿಗಳಿಗೆ ಸೇರಿದ್ದು, ಈ ಎರಡೂ ಟೋಲ್ ಪ್ಲಾಜಾಗಳ ವ್ಯಾಪ್ತಿಗೆ ಒಳಪಡುವ ರಸ್ತೆಗಳು ಪ್ರತ್ಯೇಕವಿದ್ದು, ಓವರ್‌ಲ್ಯಾಪಿಂಗ್ **(Overlapping)** ಆಗದಿರುವ ಕಾರಣ, ಸದರಿ ಟೋಲ್ ಪ್ಲಾಜಾಗಳ ಸ್ಥಳಾಂತರದ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ. ಲೋಇ E-93 ಇಎಪಿ 2021

**(ಗೋವಿಂದ ಎಂ. ಕಾರಜೋಳ)**
ಮಾನ್ಯ ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2105 |
| ಸದಸ್ಯರ ಹೆಸರು | ಶ್ರೀ ರಘುಮೂರ್ತಿ ಟಿ (ಚಳ್ಳಕೆರೆ) |
| ಉತ್ತರಿಸಬೇಕಾದ ದಿನಾಂಕ | 15.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿತ್ರದುರ್ಗ ಜಿಲ್ಲೆಯು 6 ತಾಲ್ಲೂಕುಗಳನ್ನು ಒಳಗೊಂಡಿದ್ದು, ಒಂದೇ ಉಪ ವಿಭಾಗಾಧಿಕಾರಿ ಕಛೇರಿ ಇರುವುದರಿಂದ ಸಾರ್ವಜನಿಕರಿಗೆ ಜಮೀನಿನ ವಿಚಾರ ಮತ್ತು ಇತರೆ ಸಮಸ್ಯೆಗಳನ್ನು ಪರಿಹರಿಸಿ ಕೊಳ್ಳಲು ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಿತ್ರದುರ್ಗ ಜಿಲ್ಲೆಯಲ್ಲಿ ಚಳ್ಳಕೆರೆ ತಾಲ್ಲೂಕು ಕೇಂದ್ರದಲ್ಲಿ ಉಪ ವಿಭಾಗಾಧಿಕಾರಿ ಕಚೇರಿಯನ್ನು ಪ್ರಾರಂಭಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ |
| ಆ) | ಬಂದಿದ್ದಲ್ಲಿ, ಆಡಳಿತಾತ್ಮಕ ಹಿತದೃಷ್ಟಿ ಯಿಂದ ಚಳ್ಳಕೆರೆ ತಾಲ್ಲೂಕು ಕೇಂದ್ರದಲ್ಲಿ ಉಪ ವಿಭಾಗಾಧಿಕಾರಿ ಕಛೇರಿ ಪ್ರಾರಂಭ ಮಾಡುವ ಉದ್ದೇಶ ಸರ್ಕಾರಕ್ಕಿದೆಯೇ; | |
| ಇ) | ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು ತಾಲ್ಲೂಕುಗಳನ್ನು ಸೇರಿಸಿ, ಚಳ್ಳಕೆರೆಯಲ್ಲಿ ಹೊಸದಾಗಿ ಉಪವಿಭಾಗಾಧಿಕಾರಿ ಕಛೇರಿ ಪ್ರಾರಂಭಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರು ವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ) | ಬಂದಿದ್ದಲ್ಲಿ, ಮೇಲ್ಕಂಡ ತಾಲ್ಲೂಕುಗಳ ಗ್ರಾಮದ ಜನರ ಅನುಕೂಲಕ್ಕಾಗಿ ಆಡಳಿತಾತ್ಮಕ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಚಳ್ಳಕೆರೆಯಲ್ಲಿ ಉಪ ವಿಭಾಗಾಧಿಕಾರಿ ಕಛೇರಿಯನ್ನು ಸರ್ಕಾರವು ಯಾವ ಕಾಲಮಿತಿಯಲ್ಲಿ ಪ್ರಾರಂಭಿಸಲಿದೆ? (ಸಂಪೂರ್ಣ ವಿವರ ನೀಡುವುದು) | ಪ್ರಸ್ತಾವನೆ ಕುರಿತು ಚಿತ್ರದುರ್ಗ ಜಿಲ್ಲಾಧಿಕಾರಿಗಳಿಂದ ಕೆಲವೊಂದು ಮಾಹಿತಿಗಳನ್ನು ಕೋರಿದ್ದು, ವರದಿ ನಿರೀಕ್ಷಿಸಲಾಗುತ್ತಿದೆ. ವರದಿ ಸ್ವೀಕೃತವಾದ ನಂತರ ವಾಸ್ತವಾಂಶಗಳನ್ನು ಪರಿಶೀಲಿಸಿ ಮುಂದಿನ ಕ್ರಮ ವಹಿಸಲಾಗುವುದು.<br><br>ಮುಂದುವರಿದು, ಯಾವುದೇ ಒಂದು ತಾಲ್ಲೂಕನ್ನು ಉಪ ವಿಭಾಗವನ್ನಾಗಿ ರಚಿಸುವ ಸಂದರ್ಭದಲ್ಲಿ ಅಲ್ಲಿನ ಭೌಗೋಳಿಕ ಸನ್ನಿವೇಶ, ಉಪ ವಿಭಾಗದ ರಚನೆಯಿಂದಾಗುವ ಅನುಕೂಲ, ಸಾರ್ವಜನಿಕ ಆಶೋತ್ತರಗಳಿಗೆ ಸ್ಪಂದನೆ, ತಾಲ್ಲೂಕು ಕೇಂದ್ರ ಮತ್ತು ಜಿಲ್ಲಾ ಕೇಂದ್ರಗಳಿಗಿರುವ ದೂರ ಸೇರಿದಂತೆ ಭೌಗೋಳಿಕ ಹಿನ್ನೆಲೆ, ಸಾರ್ವಜನಿಕ ಹಿತಾಸಕ್ತಿ ಮತ್ತು ಆಡಳಿತಾತ್ಮಕ ಅಂಶಗಳನ್ನು ಪರಾಮರ್ಶಿಸಲಾಗುತ್ತದೆ.<br><br>ಇದರ ಜೊತೆಗೆ, ಈ ವಿಷಯವು ಸರ್ಕಾರದ ನೀತಿಗೆ ಸಂಬಂಧಿಸಿದ್ದು, ಇಂತಹ ಪ್ರಸ್ತಾವನೆಗಳು ಭೌಗೋಳಿಕ ಮತ್ತು ಆಡಳಿತಾತ್ಮಕ ಅಗತ್ಯತೆಗಳ ಜೊತೆಗೆ ರಾಜ್ಯದ ಹಣಕಾಸಿನ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಅದರಂತೆ ಹೊಸ ಉಪ ವಿಭಾಗಗಳನ್ನು ರಚಿಸುವ ಪ್ರಸ್ತಾವನೆಗಳು ಹಣಕಾಸಿನ ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಹಣಕಾಸಿನ ಇತಿಮಿತಿಗಳನ್ನು ಒಳಗೊಂಡಿರುತ್ತವೆ. ಹೀಗಾಗಿ ಇಂತಹ ಪ್ರಸ್ತಾವನೆಗಳಿಗೆ ನಿರ್ದಿಷ್ಟ ಕಾಲಮಿತಿ ನಿಗಧಿಪಡಿಸಿರುವುದಿಲ್ಲ. |

**ಸಂಖ್ಯೆ: ಕಂಇ 20 ಎಲ್‌ಆರ್‌ಡಿ 2021**

(ಆರ್. ಅಶೋಕ)
ಕಂದಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2010 |
| ಸದಸ್ಯರ ಹೆಸರು | ಶ್ರೀ ಸಂಜೀವ ಮಠಂದೂರ್. |
| ಉತ್ತರಿಸುವ ದಿನಾಂಕ: | 15-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾವಿರಾರು ಸಾರ್ವಜನಿಕ ಭಜನಾ ಮಂದಿರಗಳು ಹಾಗೂ ಧಾರ್ಮಿಕ ಶ್ರದ್ಧಾ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ಇವುಗಳು ಸರ್ಕಾರದ ಮುಜರಾಯಿ ಹಾಗೂ ಧಾರ್ಮಿಕ ದತ್ತಿ ಇಲಾಖೆಯಡಿಯಲ್ಲಿ ನೋಂದಾವಣೆಯಾಗಿದೆಯೇ; | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾರ್ವಜನಿಕ ಭಜನಾ ಮಂದಿರಗಳು ಹಾಗೂ ಧಾರ್ಮಿಕ ಶ್ರದ್ಧಾ ಕೇಂದ್ರಗಳಿದ್ದು, ಇವುಗಳು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 53ರಡಿಯಲ್ಲಿ ನೋಂದಣಿಯಾಗಿರುವುದಿಲ್ಲ. |
| ಆ | ಮುಜರಾಯಿ ಹಾಗೂ ಧಾರ್ಮಿಕ ದತ್ತಿ ಇಲಾಖೆಯಡಿಯಲ್ಲಿ ಭಜನಾ ಮಂದಿರಗಳು ಹಾಗೂ ಧಾರ್ಮಿಕ ಶ್ರದ್ಧಾ ಕೇಂದ್ರಗಳು ನೋಂದಾವಣೆಯಾಗಬೇಕೆಂಬ ನಿಯಮಾವಳಿ ಪ್ರಸ್ತುತ ಜಾರಿಯಲ್ಲಿ ಇರುವುದೇ; | ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 53ರಡಿ, ಅಧಿನಿಯಮದ 23ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿತ ದೇವಸ್ಥಾನಗಳನ್ನು ಹೊರತುಪಡಿಸಿ, ಯಾವುದೇ ದೇವಾಲಯದ ವ್ಯವಸ್ಥಾಪನೆಯ ಪ್ರಭಾರದಲ್ಲಿರುವ ನ್ಯಾಸಧಾರಿ, ವ್ಯವಸ್ಥಾಪಕ ಅಥವಾ ಯಾವುದೇ ಇತರೆ ವ್ಯಕ್ತಿಯು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಅಧಿನಿಯಮ 2011ರ ಪ್ರಾರಂಭದ ದಿನಾಂಕದಿಂದ 90 ದಿನದೊಳಗೆ ದೇವಸ್ಥಾನವು ಯಾರ ಅಧಿಕಾರ ವ್ಯಾಪ್ತಿಯೊಳಗೆ ಬರುತ್ತದೆಯೋ ಅಂತಹ ಸಹಾಯಕ ಆಯುಕ್ತರಿಗೆ ದೇವಸ್ಥಾನದ ನೋಂದಣಿಗಾಗಿ ಅರ್ಜಿಯನ್ನು ಸಲ್ಲಿಸತಕ್ಕದ್ದು ಎಂದಿರುತ್ತದೆ.<br>ಅದರನ್ವಯ ಕೇವಲ ದೇವಸ್ಥಾನಗಳನ್ನು ಮಾತ್ರ ನೋಂದಾಯಿಸಿಕೊಳ್ಳಲು ಅವಕಾಶವಿರುತ್ತದೆ. ಆದರೆ ಧಾರ್ಮಿಕ ದತ್ತಿ ಕಾಯ್ದೆಯಡಿಯಲ್ಲಿ ಭಜನಾ ಮಂದಿರಗಳು ಹಾಗೂ ಶ್ರದ್ಧಾ ಕೇಂದ್ರಗಳನ್ನು ನೋಂದಾಯಿಸಲು ಅವಕಾಶವಿರುವುದಿಲ್ಲ. |
| ಇ | ಇಲ್ಲದಿದ್ದಲ್ಲಿ, ಹೊಸದಾಗಿ ನಿಯಮಾವಳಿಯನ್ನು ರಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ಇದ್ದಲ್ಲಿ ಈ ಬಗ್ಗೆ ಯಾವಾಗ ಕ್ರಮ ಕೈಗೊಳ್ಳಲಾಗುವುದು? | ಧಾರ್ಮಿಕ ದತ್ತಿ ಇಲಾಖೆಯಡಿಯಲ್ಲಿ ಭಜನಾ ಮಂದಿರಗಳು ಹಾಗೂ ಧಾರ್ಮಿಕ ಶ್ರದ್ಧಾ ಕೇಂದ್ರಗಳನ್ನು ನೋಂದಣಿ ಮಾಡಿಕೊಳ್ಳಲು ಹೊಸದಾಗಿ ನಿಯಮಾವಳಿಯನ್ನು ರಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

(ಸಂಖ್ಯೆ:ಕಂಇ 50 ಮುಸಪ್ರ 2021)

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1384

ಸದಸ್ಯರ ಹೆಸರು : ಶ್ರೀ ಹಾಲಪ್ಪ ಹರತಾಳ್ ಹೆಚ್.[ಸಾಗರ]

ಉತ್ತರಿಸುವ ದಿನಾಂಕ : 15.03.2021

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಾಗರ ತಾಲ್ಲೂಕು ಕಸಬಾ ಹೋಬಳಿ ಬಳಸಗೋಡು ಗ್ರಾಮದ ಸರ್ವೆ ನಂ 2ರಲ್ಲಿ 25 ಎಕರೆ ಸರ್ಕಾರಿ ಜಮೀನನ್ನು ಯಾರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲಾಗಿದೆ; | ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕು ಕಸಬಾ ಹೋಬಳಿ ಬಳಸಗೋಡು ಗ್ರಾಮದ ಸರ್ವೆ ನಂ 2ರಲ್ಲಿ 25 ಎಕರೆ ಸರ್ಕಾರಿ ಜಮೀನನ್ನು ಮೂಲಿಕಾ ಸಮೃದ್ಧಿ ಆರೋಗ್ಯಾಭಿವೃದ್ಧಿ ಪ್ರತಿಷ್ಠಾನ [ರಿ] ಇವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲಾಗಿದೆ. |
| ಆ) | ಸದರಿ ಜಮೀನನ್ನು ಯಾವ ಉದ್ದೇಶ ಮತ್ತು ಯಾವ ಯೋಜನೆಯಡಿ ನೀಡಲಾಗಿದೆ; ಇದಕ್ಕೆ ನೀಡಿದ ಅನುದಾನವೆಷ್ಟು; (ವಿವರ ಒದಗಿಸುವುದು) | ಪ್ರಸ್ತಾಪಿತ ಜಮೀನನ್ನು ಮೂಲಿಕಾ ಸಮೃದ್ಧಿ ಆರೋಗ್ಯಾಭಿವೃದ್ಧಿ ಪ್ರತಿಷ್ಠಾನ [ರಿ] ಇವರಿಗೆ ಔಷಧಿ ಸಸ್ಯಗಳನ್ನು ಬೆಳೆಸುವ ಉದ್ದೇಶಕ್ಕಾಗಿ ನೀಡಲಾಗಿದೆ. ಈ ಯೋಜನೆಗೆ ಸರ್ಕಾರದಿಂದ ಯಾವುದೇ ಅನುದಾನ ನೀಡಿರುವುದಿಲ್ಲ. |
| ಇ) | ಈ ಪೈಕಿ ಬಳಸಿಕೊಂಡ ಅನುದಾನವೆಷ್ಟು; ಹಾಗೂ ಉಳಿದ ಅನುದಾನವೆಷ್ಟು; (ಪೂರ್ಣ ವಿವರ ಒದಗಿಸುವುದು) | ಈ ಯೋಜನೆಗೆ ಸರ್ಕಾರದಿಂದ ಯಾವುದೇ ಅನುದಾನ ನೀಡದೇ ಇರುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ಸದರಿ ಜಮೀನಿನಲ್ಲಿ ಔಷಧಿ ಗಿಡಗಳನ್ನು ಬೆಳಸದೆ ಶುಂಠಿ ಬೆಳೆದಿರುವುದು ಹಾಗೂ ಖಾಸಗಿಯವರು ರಿಯಲ್ ಎಸ್ಟೇಟ್ ಉದ್ಯಮ ನಡೆಸಲು ಪ್ರಯತ್ನಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ಪ್ರಸ್ತಾಪಿತ ಜಮೀನಿನಲ್ಲಿ ನೈಸರ್ಗಿಕವಾಗಿ ಬೆಳೆದ ಮರಗಳ ಸಂರಕ್ಷಣೆ ಪ್ರತಿಷ್ಠಾನದ ಹೊಣೆಯಾಗಿರುತ್ತದೆ ಎಂದು ಗುತ್ತಿಗೆ ನೀಡುವ ಸಂದರ್ಭದಲ್ಲಿ ಪ್ರತಿಷ್ಠಾನದಿಂದ ಪ್ರಮಾಣ ಪತ್ರ ಪಡೆಯಲಾಗಿರುತ್ತದೆ. ಆದರೆ ಸದರಿ ಪ್ರದೇಶದಲ್ಲಿನ ಮರ-ಗಿಡಗಳನ್ನು ಕಡಿದು ನಾಶ ಮಾಡಿರುವುದು ಗಮನಕ್ಕೆ ಬಂದ ತಕ್ಷಣವೇ ತಹಶೀಲ್ದಾರ್, ಸಾಗರ ತಾಲ್ಲೂಕು ದಿನಾಂಕ:25.01.2021ರಂದು ಉಪವಿಭಾಗಾಧಿಕಾರಿ, ಸಾಗರ ಉಪವಿಭಾಗ, ಇವರೊಂದಿಗೆ ಸ್ಥಳ ಪರಿಶೀಲನೆ ಮಾಡಿರುತ್ತಾರೆ. ಸ್ಥಳ ಪರಿಶೀಲನೆ ಸಂದರ್ಭ ಷರತ್ತು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಗುತ್ತಿಗೆ ಸಂದರ್ಭದಲ್ಲಿ ನೀಡಿದ ಮರಗಳ ಪಟ್ಟಿಯೊಂದಿಗೆ ಈ ಕುರಿತು ವರದಿ ನೀಡುವಂತೆ ದಿನಾಂಕ:25.01.2021ರಂದು ಉಪಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಸೂಚಿಸಿದೆ.<br><br>ಮಂಜೂರಾತಿ ಅವಧಿಯಲ್ಲಿ ನೀಡಲಾದ ಷರತ್ತನ್ನು ಉಲ್ಲಂಘಿಸಿ ನಿಯಮಬಾಹಿರವಾಗಿ ಒತ್ತುವರಿ ಮಾಡಿರುವ ಬಗ್ಗೆ |

| | | |
|---|---|---|
| | | ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 25ರಡಿಯಲ್ಲಿ ಸದರಿ ಸಂಸ್ಥೆಗೆ ಏಕೆ ಗುತ್ತಿಗೆ ರದ್ದುಪಡಿಸಬಾರದೆಂಬ ಬಗ್ಗೆ ತಿಳುವಳಿಕೆ ನೋಟೀಸ್ ನೀಡಲಾಗಿರುತ್ತದೆ.<br><br>ತಿಳುವಳಿಕೆ ನೋಟಿಸ್‌ಗೆ ಸಂಸ್ಥೆಯು ಯಾವುದೇ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಆದರೆ, ಅರಣ್ಯ ಇಲಾಖೆಯು ಸಲ್ಲಿಸಿರುವ ವರದಿಯನ್ವಯ ಮೂಲಿಕಾ ಸಮೃದ್ಧಿ ಆರೋಗ್ಯಾಭಿವೃದ್ಧಿ ಪ್ರತಿಷ್ಠಾನ [ರಿ] ಸಂಸ್ಥೆಯು ಗುತ್ತಿಗೆ ಷರತ್ತುಗಳನ್ನು ಉಲ್ಲಂಘಿಸಿರುವುದು ಕಂಡು ಬಂದಿದ್ದು, ಸಂಸ್ಥೆಯು ಗುತ್ತಿಗೆ ಪಡೆದ ಜಮೀನನ್ನು ಮೂಲ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ವಿಫಲವಾಗಿರುವುದರಿಂದ ಪ್ರಸ್ತಾಪಿತ ಜಮೀನಿನ ಗುತ್ತಿಗೆಯನ್ನು ರದ್ದುಪಡಿಸಲು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ ನಂತರ ಪರಿಶೀಲಿಸಿ, ಗುತ್ತಿಗೆಯನ್ನು ರದ್ದುಪಡಿಸುವ ಬಗ್ಗೆ ನಿಯಮಾನುಸಾರ ಕ್ರಮವಹಿಸಲಾಗುವುದು. |

**ಸಂಖ್ಯೆ: ಆರ್‌ಡಿ 38 ಎಲ್‌ಜಿಕ್ಯೂ 2021**

**(ಆರ್.ಅಶೋಕ)**
**ಕಂದಾಯ ಸಚಿವರು.**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2111
ಸದಸ್ಯರ ಹೆಸರು : ಶ್ರೀ ಮಹದೇವಪ್ಪ ಶಿವಲಿಂಗಪ್ಪ ಯಾದವಾಡ್ (ರಾಮದುರ್ಗ)
ಉತ್ತರಿಸಬೇಕಾದ ದಿನಾಂಕ : 15.03.2021
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| ಕ್ರ. ಸಂ | ಚುಕ್ಕೆ ಗುರುತಿನ ಪ್ರಶ್ನೆ | ಉತ್ತರ |
|---|---|---|
| ಅ | 2019-20 ರಲ್ಲಿ ಮಲ್ಲಪ್ರಭಾ ನದಿಯಿಂದ ಉಂಟಾದ ಪ್ರವಾಹದಿಂದ ರಾಮದುರ್ಗ ತಾಲ್ಲೂಕಿನ ರೈತರುಗಳ ಎಷ್ಟು ಎಕರೆ ಜಮೀನುಗಳು ಕೊಚ್ಚಿಕೊಂಡು ಹೋಗಿ ಹಾನಿಯಾಗಿರುತ್ತವೆ ; (ವಿವರ ನೀಡುವುದು) | ಬೆಳಗಾವಿ ಜಿಲ್ಲೆಯ, ರಾಮದುರ್ಗ ತಾಲೂಕಿನಲ್ಲಿ 2019-20 ನೇ ಸಾಲಿನಲ್ಲಿ, ಉಂಟಾದ ಪ್ರವಾಹದಿಂದ (ಕೃಷಿ ಇಲಾಖೆಯ ಪ್ರಾಥಮಿಕ ವರದಿಯ ಪ್ರಕಾರ) ಒಟ್ಟು 687 ರೈತರುಗಳ 1222.02 ಎಕರೆ (558.31 ಹೆಕ್ಟೇರ್) ಜಮೀನು ಕೊಚ್ಚಿಕೊಂಡು ಹೋಗಿ ಹಾನಿಯಾಗಿರುತ್ತದೆ ಎಂದು ಜಿಲ್ಲಾಧಿಕಾರಿಗಳು ಮಾಹಿತಿ ನೀಡಿರುತ್ತಾರೆ. |
| ಆ | ಈ ಸಂಬಂಧ ಕಂದಾಯ ಇಲಾಖೆಯಿಂದ ಎಷ್ಟು ಪರಿಹಾರ ನೀಡಲಾಗಿದೆ; (ವಿವರ ನೀಡುವುದು) | ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಕೃಷಿ ಇಲಾಖೆಯ ಪ್ರಾಥಮಿಕ ವರದಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ಅಂತಿಮ ವರದಿಯನ್ನು ಸಲ್ಲಿಸಿದ ನಂತರ, ಪರಿಹಾರ ತಂತ್ರಾಂಶದಲ್ಲಿ ದಾಖಲಿಸಲು ಅನುಮತಿ ನೀಡುವ ಬಗ್ಗೆ ಪರಿಶೀಲಿಸಲಾಗುವುದು. |
| ಇ | ಅತೀವೃಷ್ಟಿಯಿಂದ ಹಾಳಾಗಿರುವ ಜಮೀನುಗಳಿಗೆ ಒಂದು ಎಕರೆಗೆ ಎಷ್ಟು ಮೊತ್ತದ ಪರಿಹಾರವನ್ನು ನಿಗದಿಪಡಿಸಲಾಗಿದೆ ;(ವಿವರ ನೀಡುವುದು) | ಎನ್‌ಡಿಆರ್‌ಎಫ್/ ಎಸ್‌ಡಿಆರ್‌ಎಫ್ ಮಾರ್ಗಸೂಚಿ ಅನ್ವಯ ಅತಿವೃಷ್ಟಿಯಿಂದ ಹಾಳಾಗಿರುವ ಜಮೀನುಗಳಿಗೆ ಒಂದು ಎಕರೆಗೆ ರೂ.15000/-ಗಳ ಪರಿಹಾರವನ್ನು ನಿಗದಿ ಪಡಿಸಲಾಗಿದೆ. (ಪ್ರತಿ ಹೆಕ್ಟೇರ್‌ಗೆ ರೂ.37,500/- ದಂತೆ ಗರಿಷ್ಠ ಎರಡು ಹೆಕ್ಟೇರ್‌ಗೆ ಸೀಮಿತಗೊಳಿಸಿ ನಿಗದಿಪಡಿಸಲಾಗಿದೆ) |
| ಈ | ಪರಿಹಾರ ಹಣವನ್ನು ನೀಡಲು ಬಾಕಿಯಿರುವ ಪ್ರಕರಣಗಳು ಎಷ್ಟು ? (ವಿವರ ನೀಡುವುದು) | 687 ಪ್ರಕರಣಗಳ ಮಾಹಿತಿಯನ್ನು ಪರಿಹಾರ ತಂತ್ರಾಂಶದಲ್ಲಿ ದಾಖಲಿಸಿದ ನಂತರ, ನಿಯಮಾನುಸಾರ ಪರಿಹಾರ ಪಾವತಿಸಲು ಕ್ರಮಕೈಗೊಳ್ಳಲಾಗುತ್ತದೆ. |

*ಕಂಇ 105 ಟಿಎನ್‌ಆರ್ 2021*

(ಆರ್. ಅಶೋಕ)
ಕಂದಾಯ ಸಚಿವರು

**ಕರ್ನಾಟಕ ವಿಧಾನ ಸಭೆ**

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: | * 1390 |
| ಸದಸ್ಯರ ಹೆಸರು | ಶ್ರೀ ನಾಗೇಂದ್ರ. ಎಲ್. |
| ಉತ್ತರಿಸುವ ದಿನಾಂಕ: | 15-03-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ನಗರದ ದೇವರಾಜ ಮೊಹಲ್ಲ, ಸಂತೇಪೇಟೆಯಲ್ಲಿರುವ ಶ್ರೀ ಪ್ರಸನ್ನ ನಂಜುಂಡೇಶ್ವರ ಸ್ವಾಮಿ ದೇವಾಲಯವನ್ನು ಚಾಮುಂಡೇಶ್ವರಿ ಬೆಟ್ಟದ ದೇವಸ್ಥಾನದ ಅಡಿಯಲ್ಲಿ ದತ್ತು ಪಡೆದು ಅಭಿವೃದ್ಧಿ ಪಡಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಮೈಸೂರು ನಗರದ ದೇವರಾಜ ಮೊಹಲ್ಲ, ಸಂತೇಪೇಟೆಯಲ್ಲಿರುವ ಶ್ರೀ ಪ್ರಸನ್ನ ನಂಜುಂಡೇಶ್ವರ ಸ್ವಾಮಿ ದೇವಾಲಯವನ್ನು ಚಾಮುಂಡೇಶ್ವರಿ ಬೆಟ್ಟದ ದೇವಸ್ಥಾನದ ಅಡಿಯಲ್ಲಿ ದತ್ತು ಪಡೆದು ಅಭಿವೃದ್ಧಿ ಪಡಿಸುವ ಪ್ರಸ್ತಾವನೆಯು ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಸಚಿವರು ಅಧ್ಯಕ್ಷರಾಗಿರುವ ರಾಜ್ಯ ಧಾರ್ಮಿಕ ಪರಿಷತ್ತಿನಲ್ಲಿ ವಿಚಾರಣೆಯಲ್ಲಿರುತ್ತದೆ. |
| ಆ | ಹಾಗಿದ್ದಲ್ಲಿ ಪ್ರಸ್ತಾವನೆಯ ಯಾವ ಹಂತದಲ್ಲಿದೆ, ಈ ದೇವಾಲಯವನ್ನು ದತ್ತು ಪಡೆಯಲು ಬಿಡುಗಡೆ ಮಾಡಲಾಗಿರುವ ಅನುದಾನವೆಷ್ಟು; (ವಿವರ ಒದಗಿಸುವುದು) | ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕು, ಚಾಮುಂಡಿ ಬೆಟ್ಟದಲ್ಲಿರುವ ಶ್ರೀ ಚಾಮುಂಡೇಶ್ವರಿ ದೇವಾಲಯದ ವತಿಯಿಂದ ಮೈಸೂರು ನಗರ ಸಂತೇಪೇಟೆಯಲ್ಲಿರುವ ಶ್ರೀ ಪ್ರಸನ್ನ ನಂಜುಂಡೇಶ್ವರ ಸ್ವಾಮಿ ದೇವಾಲಯವನ್ನು ದತ್ತು ತೆಗೆದುಕೊಳ್ಳುವ ಸಂಬಂಧ ರಾಜ್ಯ ಧಾರ್ಮಿಕ ಪರಿಷತ್ತಿನ ವೇದ ವಿದ್ವಾಂಸರು, ಧಾರ್ಮಿಕ ದತ್ತಿ ಇಲಾಖೆಯ ಕೇಂದ್ರ ಕಛೇರಿಯ ಹಿರಿಯ ಆಗಮ ಪಂಡಿತರು ಮತ್ತು ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರುಗಳನ್ನು ಪ್ರಸ್ತಾಪಿತ ದೇವಾಲಯಕ್ಕೆ ನಿಯೋಜಿಸಿ, ಇವರಿಂದ ಸ್ಥಳ ಪರಿಶೀಲನೆ ನಡೆಸಿ, ದತ್ತು ತೆಗೆದುಕೊಂಡು ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳು, ಆಡಳಿತ ಸುಧಾರಣೆ ಹಾಗೂ ದೇವಾಲಯದಿಂದ ಹೆಚ್ಚಿನ ಆದಾಯ ತರುವ ನಿಟ್ಟಿನಲ್ಲಿ ಕೈಗೊಳ್ಳಬಹುದಾದ ವಿಷಯಗಳ ಬಗ್ಗೆ ವರದಿ ಪಡೆದು ಮುಂದಿನ ರಾಜ್ಯ ಧಾರ್ಮಿಕ ಪರಿಷತ್ ಸಭೆಯಲ್ಲಿ ಮಂಡಿಸಲು ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ತೀರ್ಮಾನಿಸಲಾಗಿರುತ್ತದೆ. |
| ಇ | ಈ ಪ್ರಸ್ತಾವನೆಯನ್ನು ಯಾವ ಕಾಲಮಿತಿಯೊಳಗೆ ಪೂರ್ಣ ಗೊಳಿಸಲಾಗುವುದು; ವಿಳಂಬಕ್ಕೆ ಕಾರಣಗಳೇನು? | ಮುಂದಿನ ರಾಜ್ಯ ಧಾರ್ಮಿಕ ಪರಿಷತ್ತಿನ ಸಭೆಯಲ್ಲಿ ಮಂಡಿಸಿ ಈ ಪ್ರಸ್ತಾವನೆ ಕುರಿತು ಚರ್ಚಿಸಿ, ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು. |

(ಸಂಖ್ಯೆ:ಕಂಇ 49 ಮುಸಪ್ರ 2021)

**(ಕೋಟಾ ಶ್ರೀನಿವಾಸ ಪೂಜಾರಿ)**
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.



# ಕರ್ನಾಟಕ ವಿಧಾನ ಸಭೆ

| | |
|---|---|
| ಮಾನ್ಯ ಸದಸ್ಯರ ಹೆಸರು | ಡಾ: ಶ್ರೀನಿವಾಸಮೂರ್ತಿ. ಕೆ. (ನೆಲಮಂಗಲ) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1469 |
| ಉತ್ತರಿಸುವ ದಿನಾಂಕ | 15.03.2021 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | ನೆಲಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕರ್ನಾಟಕ ಸ್ಲಂ ಬೋರ್ಡ್ ವತಿಯಿಂದ PMAY (U) - HFA State Housing Schemes ಅಡಿಯಲ್ಲಿ ಮಂಜೂರು ಮಾಡಲಾದ 200 ಮನೆಗಳನ್ನು ನಿರ್ಮಾಣ ಮಾಡಲು ಯಾವ ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಲಾಗಿದೆ; | ನೆಲಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಕೊಳಗೇರಿಗಳಲ್ಲಿ PMAY (U) - HFA ಅಡಿಯಲ್ಲಿ 200 ಮನೆಗಳನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ವತಿಯಿಂದ ನಿರ್ಮಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಮನೆಗಳ ನಿರ್ಮಾಣಕ್ಕಾಗಿ ಟೆಂಡರ್ ಕರೆಯಲಾಗಿದೆ ಹಾಗೂ ಟೆಂಡರ್ ಪ್ರಕ್ರಿಯೆಯು ಜಾರಿಯಲ್ಲಿದೆ. ಈ ಬಗ್ಗೆ ಇನ್ನೂ ಕಾರ್ಯಾದೇಶ ನೀಡಿರುವುದಿಲ್ಲ. |
| ಆ | ಈ ಯೋಜನೆಯನ್ನು ಯಾವಾಗ ಪ್ರಾರಂಭ ಮಾಡಲಾಗುವುದು ಹಾಗೂ ಇದರ ಅಂದಾಜು ಮೊತ್ತವೆಷ್ಟು; ಯಾವ ಕಾಲಮಿತಿ ಯಲ್ಲಿ ಪೂರ್ಣಗೊಳಿಸಲಾಗುವುದು; | ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಿ, ಕಾಮಗಾರಿಯನ್ನು ಪ್ರಾರಂಭಿಸಲಾಗುವುದು ಹಾಗೂ ಕಾರ್ಯಾದೇಶ ನೀಡಿದ 12 ತಿಂಗಳ ಅವಧಿಯೊಳಗಾಗಿ ಪೂರ್ಣಗೊಳಿಸಲು ಕ್ರಮ ವಹಿಸಲಾಗುವುದು. ಸದರಿ ಯೋಜನೆಯ ಅಂದಾಜು ಮೊತ್ತವು ರೂ. 13.49 ಕೋಟಿಗಳಾಗಿರುತ್ತದೆ. |
| ಇ | ಈ ಮನೆಗಳ ನಿರ್ಮಾಣಕ್ಕೆ ಇರುವ ಮಾನದಂಡಗಳೇನು; ಈ ಮನೆಗಳನ್ನು ನಿರ್ಮಾಣ ಮಾಡಲು ಜಾಗ ಗುರುತು ಮಾಡಲಾಗಿದೆಯೇ; | ಪ್ರಧಾನ ಮಂತ್ರಿ ಆವಾಸ್ ಯೋಜನೆ - "ಸರ್ವರಿಗೂ ಸೂರು" ಯೋಜನೆಯ ಮಾರ್ಗಸೂಚಿಯಂತೆ ಘೋಷಿತ ಕೊಳಗೇರಿಗಳಲ್ಲಿ ಬೇಡಿಕೆ ಸಮೀಕ್ಷೆಯನ್ನು ಕೈಗೊಂಡು, ಬೇಡಿಕೆ ಸಮೀಕ್ಷೆ ಆಧಾರದ ಮೇಲೆ ಕಚ್ಚಾ ಮತ್ತು ಅರೇ ಪಕ್ಕಾ ಮನೆಗಳಲ್ಲಿ ವಾಸವಾಗಿರುವ ನಿವಾಸಿಗಳನ್ನು ಆಯ್ಕೆ ಮಾಡಲಾಗುವುದು.<br><br>ನೆಲಮಂಗಲ ವಿಧಾನ ಸಭಾ ಕ್ಷೇತ್ರದಲ್ಲಿ ಕೆಳಕಂಡ ಕೊಳಗೇರಿಗಳಲ್ಲಿ ಪ್ರಸ್ತುತ ಕಚ್ಚಾ ಮತ್ತು ಅರೇ ಪಕ್ಕಾ ಮನೆಗಳಲ್ಲಿ ವಾಸಿಸುತ್ತಿರುವ ನಿವಾಸಿಗಳ ಮನೆಗಳನ್ನು ಕೆಡವಿ, ಸದರಿ ನಿವಾಸಿಗಳಿಗೆ ಅದೇ ಸ್ಥಳದಲ್ಲಿ (In-situ ಮಾದರಿಯಲ್ಲಿ) ಮನೆಗಳನ್ನು ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ:- |

| ಕ್ರ. ಸಂ. | ಕೊಳಗೇರಿಗಳ ಹೆಸರು | ಮನೆಗಳ ಸಂಖ್ಯೆ |
|---|---|---|
| 1 | ಜಯನಗರ ಹಂತ-1 | 25 |
| 2 | ಜಯನಗರ ಹಂತ-2 | 40 |
| 3 | ಚೆನ್ನಪ್ಪ ಕಲ್ಯಾಣಿ | 35 |
| 4 | ಇಂದಿರಾನಗರ | 60 |
| 5 | ರಾಯನಗರ | 40 |
| | **ಒಟ್ಟು:** | **200** |

<table>
<tr><td>ಈ</td><td>ನೆಲಮಂಗಲ ಕ್ಷೇತ್ರಕ್ಕೆ ಸ್ಲಂ ಬೋರ್ಡ್‌ನಿಂದ ಯಾವ ಯಾವ ಕಾಮಗಾರಿಗಳನ್ನು ಮಂಜೂರು ಮಾಡಲಾಗಿದೆ;</td><td>ನೆಲಮಂಗಲ ಕ್ಷೇತ್ರಕ್ಕೆ ಕೊಳಗೇರಿ ಸುಧಾರಣೆ ಯೋಜನೆಯಡಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನಕ್ಕೆ ಅನುಗುಣವಾಗಿ ಕೊಳಗೇರಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಕೈಗೊಂಡಿರುವ ಕಾಮಗಾರಿಗಳ ವಿವರವು ಕೆಳಕಂಡಂತಿದೆ:-<br>(ರೂ. ಲಕ್ಷಗಳಲ್ಲಿ)
<table>
<tr><th>ಕ್ರ. ಸಂ.</th><th>ವರ್ಷ</th><th>ಕೊಳಗೇರಿ ಗಳ ಹೆಸರು</th><th>ಕಾಮಗಾರಿ ಗಳ ವಿವರ</th><th>ಅಂದಾಜು ಮೊತ್ತ</th><th>ಷರಾ</th></tr>
<tr><td>1</td><td>2019-20</td><td>ಜಯನಗರ ಹಾಗೂ ಇತರ</td><td>ರಸ್ತೆ ಮತ್ತು ಚರಂಡಿ</td><td>10.00</td><td>ಕಾಮಗಾರಿ ಪ್ರಾರಂಭಿಸಬೇಕಾಗಿದೆ.</td></tr>
<tr><td>2</td><td>2020-21</td><td>ಜಯನಗರ</td><td>ಚರಂಡಿ</td><td>25.00</td><td>ಟೆಂಡರ್ ಪ್ರಕ್ರಿಯೆಯು ಜಾರಿಯಲ್ಲಿದೆ.</td></tr>
<tr><td></td><td></td><td>ಒಟ್ಟು:</td><td></td><td>35.00</td><td></td></tr>
</table></td></tr>
<tr><td>ಉ</td><td>ಈ ಕ್ಷೇತ್ರದಲ್ಲಿ ಸಮೂಹ ಮನೆಗಳ ನಿರ್ಮಾಣ ಮಾಡುವ ಉದ್ದೇಶ ಸರ್ಕಾರಕ್ಕಿದೆಯೇ?</td><td>ನೆಲಮಂಗಲ ವಿಧಾನ ಸಭಾ ಕ್ಷೇತ್ರದಲ್ಲಿ ಸಮೂಹ ಮನೆಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸರ್ಕಾರದ ಮುಂದೆ ಪ್ರಸ್ತುತ ಯಾವುದೇ ಪ್ರಸ್ತಾವನೆ ಇರುವುದಿಲ್ಲ.</td></tr>
</table>

[ಸಂಖ್ಯೆ: ವಇ 53 ಹೆಚ್‌ಎಫ್‌ಎ 2021]

(ವಿ. ಸೋಮಣ್ಣ)
ವಸತಿ ಸಚಿವರು.



# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ರಂಗನಾಥ್ ಹೆಚ್.ಡಿ. ಡಾ॥ (ಕುಣಿಗಲ್)

ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ : 2161

ಉತ್ತರಿಸಬೇಕಾದ ದಿನಾಂಕ : 15.03.2021.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | "ಪಶುಭಾಗ್ಯ" ಯೋಜನೆ ಅಡಿ ಫಲಾನುಭವಿಗಳನ್ನು ಗುರುತಿಸಲು ಇರುವ ಮಾನದಂಡಗಳೇನು: | ಮಾನದಂಡಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಿದೆ |
| ಆ | ಒಮ್ಮೆ ಲಾಭ ಪಡೆದ ಫಲಾನುಭವಿಗಳೇ ಮತ್ತೊಮ್ಮೆ ಅರ್ಜಿ ಸಲ್ಲಿಸಿ ಯೋಜನೆಯ ಲಾಭವನ್ನು ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿಲ್ಲ |
| ಇ | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು: | ಅನ್ವಯಿಸುವುದಿಲ್ಲ. |
| ಈ | ಈ ಯೋಜನೆ ಅಡಿ ಲಾಭ ಪಡೆದ ಒಟ್ಟು ಫಲಾನುಭವಿಗಳೆಷ್ಟು (ಕಳೆದ ಮೂರು ವರ್ಷಗಳ ಜಿಲ್ಲಾವಾರು ಮಾಹಿತಿ ನೀಡುವುದು). | ಕೆಳಗಿನ ಕೋಷ್ಟಕ ನೋಡಿ |

| ಕ್ರಮ ಸಂಖ್ಯೆ | ವರ್ಷ | ಫಲಾನುಭವಿಗಳ ಸಂಖ್ಯೆ |
|---|---|---|
| 1 | 2017-18 | 26354 |
| 2 | 2018-19 | 39846 |
| 3 | 2019-20 | 7777 |

ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ-2** ರಲ್ಲಿ ಲಗತ್ತಿಸಿದೆ

ಪಸಂಮೀ ಇ-84 ಸಲೆವಿ 2021

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು,

## ಅನುಬಂಧ –1

## ಪಶುಭಾಗ್ಯ (ಫಲಾನುಭವಿ ಆಧಾರಿತ) ಕಾರ್ಯಕ್ರಮಗಳಿಗೆ ಫಲಾನುಭವಿ ಆಯ್ಕೆ ಮಾಡಲು ಇರುವ ಮಾನದಂಡಗಳು

1. **ಅರ್ಹ ಫಲಾನುಭವಿಗಳು**

- ಈ ಯೋಜನಾ ಕಾರ್ಯಕ್ರಮಕ್ಕೆ ಫಲಾನುಭವಿಗಳು ಕೂಲಿ ಕೃಷಿ ಕಾರ್ಮಿಕರು, ಸಣ್ಣ ಮತ್ತು ಅತೀ ಸಣ್ಣ ರೈತರಾಗಿರಬೇಕು.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಠ ಪಂಗಡದವರಾಗಿದ್ದರೆ ಜಾತಿ ಪ್ರಮಾಣ ಪತ್ರವನ್ನು ಹೊಂದಿರಬೇಕು
- ಈ ಕಾರ್ಯಕ್ರಮದಲ್ಲಿ ಸರ್ಕಾರದ ನಿಯಮಗಳಂತೆ, ಮಹಿಳೆಯರಿಗೆ, ಅಲ್ಪಸಂಖ್ಯಾತರಿಗೆ ಹಾಗೂ ವಿಶೇಷ ಚೇತನರಿಗೆ ಆದ್ಯತೆ ನೀಡುವುದು.
- ಈ ಕಾರ್ಯಕ್ರಮದ ಫಲಾನುಭವಿಗಳು FRUIT ID ಯನ್ನು ಕಡ್ಡಾಯವಾಗಿ ಹೊಂದಿರಬೇಕು.

2. **ಫಲಾನುಭವಿಗಳ ಆಯ್ಕೆ**

- ಫಲಾನುಭವಿಗಳ ಆಯ್ಕೆಯನ್ನು ವಿಧಾನ ಸಭಾ ಕ್ಷೇತ್ರವಾರು ರಚಿಸಿರುವ ಆಯ್ಕೆ ಸಮಿತಿಯಲ್ಲಿ ಆಯ್ಕೆ ಮಾಡಲಾಗುವುದು.
- ತಾಲ್ಲೂಕು ಸಹಾಯ ನಿರ್ದೇಶಕರು ವಿಧಾನ ಸಭಾ ಕ್ಷೇತ್ರವಾರು ಫಲಾನುಭವಿಗಳಿಂದ ಬಂದ ಅರ್ಜಿಗಳನ್ನು ಪಡೆದು ವಿಧಾನ ಸಭಾ ಕ್ಷೇತ್ರದ ಆಯ್ಕೆ ಸಮಿತಿ ಮೂಲಕ ನಿಗಧಿಪಡಿಸಿದ ಗುರಿಗಳಿಗನುಗುಣವಾಗಿ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಬೇಕು.

3. **ಯೋಜನೆ ಅನುಷ್ಠಾನದ ವಿಧಾನ**

- ಆಯ್ಕೆಯಾದ ಫಲಾನುಭವಿಗಳ ಸಹಾಯಧನವನ್ನು ಆಯಾ ಬ್ಯಾಂಕ್‌ಗಳಿಗೆ ಬಿಡುಗಡೆಗೊಳಿಸುವುದು.
- ಫಲಾನುಭವಿಗಳು ಆಯ್ಕೆ ಮಾಡಿರುವ ಘಟಕಗಳನ್ನು ಸ್ವತ್ತು ಖರೀದಿ ಸಮೀತಿ ಮುಖಾಂತರ ಖರೀದಿಸಿ ಫಲಾನುಭವಿಗೆ ನೀಡಬೇಕು.
- ಆಯ್ಕೆಗೊಂಡ ಫಲಾನುಭವಿಗಳ ರಾಸುಗಳಿಗೆ ಯು.ಐ.ಡಿ. ಸಂಖ್ಯೆ ಇರುವ ಟ್ಯಾಗ್‌ಗಳನ್ನು ಅಳವಡಿಸಿ ಡಾಟಾ ಬೇಸ್ ನಲ್ಲಿ ಎಲ್ಲಾ ವಿವರವನ್ನು ದಾಖಲಿಸತಕ್ಕದ್ದು.
- ಫಲಾನುಭವಿಗಳ ಸ್ವತ್ತುಗಳನ್ನು ವಿಮೆಗೊಳಪಡಿಸಲು ರಾಷ್ಟ್ರೀಯ ಜಾನುವಾರು ವಿಮೆ/ಸಾಮಾನ್ಯ ವಿಮಾ ಯೋಜನೆಯಡಿ ಕ್ರಮವಹಿಸುವುದು.
- ಈ ಯೋಜನೆಯ ಫಲಾನುಭವಿಗಳಿಗೆ ದನದ ಕೊಟ್ಟಿಗೆ/ಕುರಿ ದೊಡ್ಡಿ ನಿರ್ಮಾಣಕ್ಕಾಗಿ ಎಂ.ಜಿ.ಎನ್.ಆರ್.ಇ.ಜಿ.ಎ ಯೋಜನೆಯಡಿ ಅವಕಾಶ ಕಲ್ಪಿಸಿಕೊಡುವುದು.

ಅನುಬಂಧ–2

| ವಿಧಾನ ಸಭೆ ಸದಸ್ಯರಾದ ಡಾ॥ ರಂಗನಾಥ್ ಹೆಚ್.ಡಿ ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:2161 | | | | |
|---|---|---|---|---|
| ರಾಜ್ಯದಲ್ಲಿ ಕಳೆದ ಮೂರು ವರ್ಷಗಳಿಂದ ಪಶುಭಾಗ್ಯ ಯೋಜನೆಯಡಿಯಲ್ಲಿ ಲಾಭ ಪಡೆದ ಒಟ್ಟು ಫಲಾನುಭವಿಗಳ ಸಂಖ್ಯೆ ಜಿಲ್ಲಾವಾರು | | | | |
| ಕ್ರ ಸಂ | ಜಿಲ್ಲೆ | 2017–18 | 2018–19 | 2019–20 |
| | | ಫಲಾನುಭವಿಗಳ ಸಂಖ್ಯೆ | ಫಲಾನುಭವಿಗಳ ಸಂಖ್ಯೆ | ಫಲಾನುಭವಿಗಳ ಸಂಖ್ಯೆ |
| 1 | ಬೆಂಗಳೂರು | 1011 | 591 | 164 |
| 2 | ಬೆಂಗಳೂರು (ಗ್ರಾ) | 441 | 633 | 128 |
| 3 | ಚಿತ್ರದುರ್ಗ | 857 | 1782 | 324 |
| 4 | ಚಿಕ್ಕಬಳ್ಳಾಪುರ | 692 | 612 | 220 |
| 5 | ದಾವಣಗೆರೆ | 935 | 1476 | 314 |
| 6 | ಕೋಲಾರ | 1014 | 1393 | 232 |
| 7 | ರಾಮನಗರ | 752 | 1207 | 138 |
| 8 | ಶಿವಮೊಗ್ಗ | 928 | 971 | 207 |
| 9 | ತುಮಕೂರು | 518 | 385 | 1327 |
| 10 | ಚಾಮರಾಜನಗರ | 686 | 1186 | 180 |
| 11 | ಚಿಕ್ಕಮಗಳೂರು | 933 | 998 | 172 |
| 12 | ದಕ್ಷಿಣ ಕನ್ನಡ | 639 | 711 | 149 |
| 13 | ಹಾಸನ | 2658 | 1508 | 239 |
| 14 | ಕೊಡಗು | 364 | 466 | 70 |
| 15 | ಮೈಸೂರು | 1503 | 1732 | 355 |
| 16 | ಮಂಡ್ಯ | 1015 | 1092 | 222 |
| 17 | ಉಡುಪಿ | 324 | 354 | 93 |
| 18 | ಬೆಳಗಾವಿ | 1346 | 2435 | 535 |
| 19 | ಬಾಗಲಕೋಟೆ | 801 | 1234 | 232 |
| 20 | ಧಾರವಾಡ | 887 | 552 | 110 |
| 21 | ಗದಗ್ | 283 | 1351 | 126 |
| 22 | ಹಾವೇರಿ | 239 | 393 | 126 |
| 23 | ಉತ್ತರ ಕನ್ನಡ | 1464 | 497 | 124 |

| | | | | |
|---|---|---|---|---|
| 24 | ಬಿಜಾಪುರ | 822 | 1175 | 242 |
| 25 | ಬಳ್ಳಾರಿ | 1379 | 2568 | 359 |
| 26 | ಬೀದರ್ | 1032 | 2245 | 294 |
| 27 | ಕೊಪ್ಪಳ | 594 | 1923 | 229 |
| 28 | ಗುಲ್ಬರ್ಗ | 923 | 2087 | 371 |
| 29 | ರಾಯಚೂರು | 981 | 3077 | 280 |
| 30 | ಯಾದಗಿರಿ | 333 | 3212 | 215 |
| | ಒಟ್ಟು | **26354** | **39846** | 7777 |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತ್ತಿನ ಪ್ರಶ್ನೆ ಸಂಖ್ಯೆ | 2127 |
| ಮಾನ್ಯ ಸದಸ್ಯರ ಹೆಸರು | ಶ್ರೀ ನಿಂಬಣ್ಣನವರ್ ಸಿ.ಎಂ. (ಕಲಘಟಗಿ) |
| ಉತ್ತರಿಸಬೇಕಾದ ದಿನಾಂಕ | 15.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಘಟಗಿ ಕಂದಾಯ ತಾಲ್ಲೂಕಿನಲ್ಲಿ ಮೆಟ್ರಿಕ್-ನಂತರದ ಹಿಂದುಳಿದ ವರ್ಗಗಳ ಬಾಲಕರ ವಸತಿನಿಲಯ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಪ್ರಸ್ತುತ, ಧಾರವಾಡ ಜಿಲ್ಲೆ ಕಲಘಟಗಿ ತಾಲ್ಲೂಕಿನಲ್ಲಿ ಈ ಕೆಳಕಂಡಂತೆ 2 ಮೆಟ್ರಿಕ್-ಪೂರ್ವ ಹಾಗೂ ಒಂದು ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ ಕಾರ್ಯ ನಿರ್ವಹಿಸುತ್ತಿದ್ದು, ವಿವರ ಕೆಳಕಂಡಂತಿದೆ.<br><br>(ಕ್ರ. ಸಂ / ವಿದ್ಯಾರ್ಥಿನಿಲಯದ ವಿವರ / ಮಂಜೂರಾತಿ ಸಂಖ್ಯೆ)<br>1 / ಮೆಟ್ರಿಕ್-ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಕಲಘಟಗಿ ಟೌನ್. / 60<br>2 / ಮೆಟ್ರಿಕ್-ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ, ಕಲಘಟಗಿ ಟೌನ್. / 25<br>3 / ಮೆಟ್ರಿಕ್-ನಂತರದ ಬಾಲಕಿಯರ ವಿದ್ಯಾರ್ಥಿನಿಲಯ, ಕಲಘಟಗಿ ಟೌನ್. / 100<br><br>ಧಾರವಾಡ ಜಿಲ್ಲೆ, ಕಲಘಟಗಿ ಕಂದಾಯ ತಾಲ್ಲೂಕಿನಲ್ಲಿ ಮೆಟ್ರಿಕ್-ನಂತರದ ಬಾಲಕರ ವಿದ್ಯಾರ್ಥಿ ನಿಲಯದ ಮಂಜೂರಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಧಾರವಾಡ ಜಿಲ್ಲೆ ರವರಿಗೆ ಸೂಚಿಸಲಾಗಿದೆ. |
| ಆ) | ಮುಂಬರುವ ಶೈಕ್ಷಣಿಕ ವರ್ಷಾರಂಭದ ಹೊತ್ತಿಗೆ ಮೆಟ್ರಿಕ್-ನಂತರದ ಹಿಂದುಳಿದ ವರ್ಗಗಳ ಬಾಲಕರ ವಸತಿನಿಲಯ ಪ್ರಾರಂಭಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |

ಸಂಖ್ಯೆ:ಹಿಂವಕ 190 ಬಿಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2134 |
| ಮಾನ್ಯ ಸದಸ್ಯರ ಹೆಸರು | ಶ್ರೀ ತುಕಾರಾಮ್ ಈ. (ಸಂಡೂರ್) |
| ಉತ್ತರಿಸಬೇಕಾದ ದಿನಾಂಕ | 15.03.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಂಡೂರು ತಾಲ್ಲೂಕಿನ ವಡ್ಡು ಗ್ರಾಮದಲ್ಲಿ ಕನಕ ಭವನ ಕಟ್ಟಡ ಅರ್ಧದಲ್ಲಿಯೇ ನಿಂತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಂಡೂರು ತಾಲ್ಲೂಕಿನ ವಡ್ಡು ಗ್ರಾಮದಲ್ಲಿ ಶ್ರೀ ಭಕ್ತ ಕನಕದಾಸ ಸಂಘ(ರಿ), ಇವರ ವತಿಯಿಂದ ನಿರ್ಮಾಣ ಮಾಡುತ್ತಿರುವ ಸಮುದಾಯ ಭವನ ಕಟ್ಟಡಕ್ಕೆ ಸರ್ಕಾರದ ಆದೇಶ ಸಂಖ್ಯೆ:ಬಿಸಿಡಬ್ಲ್ಯೂ 788 ಬಿಎಂಎಸ್ 2017 ಬೆಂಗಳೂರು ದಿನಾಂಕ : 21.12.2017 ರಲ್ಲಿ ರೂ.50.00 ಲಕ್ಷಗಳ ಸಹಾಯಧನ ಮಂಜೂರು ಮಾಡಲಾಗಿರುತ್ತದೆ. ಈ ಕಛೇರಿ ಆದೇಶ ಸಂಖ್ಯೆ: BCWD-14011/05/2018-coord ದಿನಾಂಕ : 08.02.2018 ರಲ್ಲಿ ಮೊದಲನೇ ಕಂತಿನ ಅನುದಾನ ರೂ. 12.50 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ರವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರು ಸದರಿ ಕಾಮಗಾರಿಯನ್ನು ಕೆ.ಆರ್.ಐ.ಡಿ.ಎಲ್ ಬಳ್ಳಾರಿ ಇವರಿಗೆ ವಹಿಸಿದ್ದು, ಸದರಿ ಸಂಸ್ಥೆಗೆ ರೂ. 12.50 ಲಕ್ಷಗಳನ್ನು ಬಿಡುಗಡೆಗೊಳಿಸಿರುತ್ತಾರೆ. ಪ್ರಸ್ತುತ ಕಾಮಗಾರಿಯು ಲಿಂಟಲ್ ಹಂತದಲ್ಲಿರುತ್ತದೆ. |
| ಆ) | ಬಂದಿದ್ದಲ್ಲಿ, ಸದರಿ ಕಟ್ಟಡವನ್ನು ಯಾವಾಗ ಪೂರ್ಣಗೊಳಿಸಲಾಗುವುದು ? | ಸದರಿ ಸಮುದಾಯ ಭವನ ನಿರ್ಮಾಣಕ್ಕೆ ಈಗಾಗಲೇ ಮೊದಲನೇ ಕಂತಾಗಿ ಬಿಡುಗಡೆಯಾಗಿರುವ ರೂ.12.50 ಲಕ್ಷಗಳನ್ನು ವೆಚ್ಚ ಮಾಡಿರುವ ಬಗ್ಗೆ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಹಾಗೂ ಕಟ್ಟಡ ಪ್ರಗತಿ ವರದಿಯನ್ನು ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ರವರು ಸಲ್ಲಿಸಿದ ನಂತರ, ಸದರಿ ಯೋಜನೆಯಡಿ ಲಭ್ಯವಿರುವ ಅನುದಾನ ಹಾಗೂ ರಾಜ್ಯದ ಒಟ್ಟಾರೆ ಬೇಡಿಕೆಯನ್ನು ಆಧರಿಸಿ ಬಾಕಿ ಅನುದಾನ ಬಿಡುಗಡೆಗೊಳಿಸಿ ಬಾಕಿ ಕಾಮಗಾರಿಯನ್ನು ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ:ಹಿಂವಕ 196 ಬಿಂಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ